


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 135(824)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪ್ರಕಾಶ್ ಕೆ. ರಾಥೋಡ್(ನಾಮ ನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ವಿಷಯ : ಕೆ.ಐ.ಎ.ಡಿ.ಬಿ. ವತಿಯಿಂದ ಸೋಂಪುರ ಹೋಬಳಿಯ ಜಮೀನಿನ ಬಗ್ಗೆ

(ಅ) ಕೆ.ಐ.ಎ.ಡಿ.ಬಿ. ವತಿಯಿಂದ ಸೋಂಪುರ ಹೋಬಳಿಯಲ್ಲಿ ಎಷ್ಟು ಎಕರೆ ಜಮೀನನ್ನು ಕೈಗಾರಿಕೆ ಉಪಯೋಗಕ್ಕಾಗಿ ನೀಡಲಾಗಿದೆ;

(ಆ) ಉದ್ದಿಮೆಗಳಿಗೆ ಪ್ರತಿ ಎಕರೆ ಜಮೀನಿಗೆ ನಿಗದಿಪಡಿಸುವ ಮೊತ್ತ ಎಷ್ಟು;

(ಇ) ಸೋಂಪುರ ಹೋಬಳಿ ನಿಗದಿತ ಪ್ರದೇಶದಲ್ಲಿ ಮಾಲಿನ್ಯ ನಿಯಂತ್ರಣ ಮಂಡಳಿ ಬಫರ್ ಝೋನ್ ಎಂದು ಗುರುತಿಸಿ ಎಷ್ಟು ಕೈಗಾರಿಕೆಗಳನ್ನು ಸ್ಥಳಾಂತರಗೊಳಿಸಿದೆ;

(ಈ) ಹಾಲಿ ಕೈಗಾರಿಕೆಗಾಗಿ ಜಮೀನುಗಳನ್ನು ಪಡೆದಿದ್ದ ಉದ್ದಿಮೆಗಳು ರೂ.57.00 ಲಕ್ಷ ಹಣವನ್ನು ಪಾವತಿಸಿ ಖರೀದಿಸಿದ್ದು ಸದರಿ ಜಮೀನು ಬಫರ್ ಝೋನ್ ಎಂದು ತಿಳಿದ ಮೇಲೆ ಕೆ.ಐ.ಎ.ಡಿ.ಬಿ. ವತಿಯಿಂದ 2ನೇ ಹಂತ ನಿರ್ಮಾಣ ಮಾಡಿ ರೂ.75.00 ಲಕ್ಷಕ್ಕೆ ಹಂಚಿಕೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಉ) ಉದ್ದಿಮೆದಾರರು ಮೊದಲು ಪಡೆದ ಜಾಗಕ್ಕೆ ರೂ.57.00 ಲಕ್ಷ ಹಣಕ್ಕೆ ನೋಂದಣಿ ಹಣವನ್ನು ಕಟ್ಟಿದ್ದು, ಹಾಲಿ ನೋಂದಾಯಿತ ಜಾಗವನ್ನು ಕೆ.ಐ.ಎ.ಡಿ.ಬಿ. ರವರು ಹಿಂಪಡೆದು ಬದಲಿ ನಿವೇಶನವಾಗಿ 2ನೇ ಹಂತದಲ್ಲಿ ನೀಡಿದ್ದು, ಹೊಸದಾಗಿ ಖರೀದಿಸುತ್ತಿರುವ ಜಾಗಕ್ಕೆ ಸಂಪೂರ್ಣ ರೂ.75.00 ಲಕ್ಷಗಳಿಗೆ ನೋಂದಣಿ ಶುಲ್ಕ ಕಟ್ಟುವಂತೆ ಒತ್ತಾಯಿಸಿರುವುದು ನಿಜವೇ ಮೊದಲು ನೋಂದಣಿ ಸಲುವಾಗಿ ಕಟ್ಟಿದ ರೂ.57.00 ಲಕ್ಷ ಕಟ್ಟಿದ ನೋಂದಣಿ ಶುಲ್ಕವನ್ನು ಕಡಿತಗೊಳಿಸಿ ಉದ್ದಿಮೆದಾರರಿಗೆ ಅನುಕೂಲ ಮಾಡಿಕೊಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?